# ಕೀರ್ತನಾಂಜಲಿ

## (ಪ್ರಥಮ ಭಾಗ)

[ತೃತೀಯ ಮುದ್ರಣ]

ಜಿ. ಎನ್. ಲಕ್ಷ್ಮಣ ಪೈ.,

ಇವರಿಂದ ವಿರಚಿಸಲ್ಪಟ್ಟು,

ಹರಿಹರ ಛಾಪಖಾನೆ, ಪುತ್ತೂರು.,

ಇವರಿಂದ ಪ್ರಕಾಶಿಸಲ್ಪಟ್ಟಿತು.

ಪುಸ್ತಕವು ಮದರಾಸು ಟೆಕ್ಸ್ಟಬುಕ್ ಕಮಿಟಿಯಿಂದ ಅಧ್ಯಾಪಕರ ಮತ್ತು ಲೈಬ್ರರಿಗಳ ಬಗ್ಗೆಯೂ ಮುಂಬಯಿ ಟೆಕ್ಸ್ಟಬುಕ್ ಕಮಿಟಿಯಿಂದ ಪ್ರೈಮೆರಿ ಶಾಲೆಗಳ ಇನಾಮಿನ ಬಗ್ಗೆಯೂ ಮಂಜೂರಾಗಿದೆ.

೧೯೩೪



...ಕಾದಿಡಲ್ಪಟ್ಟವೆ)

ಕ್ರಯ: ೨ ಆಣೆ ೬ ಪೈ.

ಈ ಕೃತಿಯನ್ನು

ನನ್ನ

ಪೂಜ್ಯ ತೀರ್ಥರೂಪರಾದ

# ನರಸಿಂಹ ಪೈಗಳವರ

## ದಿವ್ಯ ಚರಣಾರವಿಂದಗಳಲ್ಲಿ

ಭಕ್ತಿಪೂರ್ವಕವಾಗಿ

ಅರ್ಪಿಸಿರುವೆನು.

ಗ್ರಂಥಕರ್ತ.

# ಮುನ್ನುಡಿ

ಪ್ರತಿಯೊಬ್ಬ ಮಾನವನು ತನಗೆ ಸಿಗುವ ವೇಳೆಯಲ್ಲಿ ಸ್ವಲ್ಪ ಸಮಯ
ನ್ನಾದರೂ ಪರಮಾತ್ಮನ ಗುಣನಾಮಚಿಂತನೆಯಲ್ಲಿ ಕಳೆಯುವುದರಿಂದ ಆತ್ಮಶುದ್ಧಿ
ನ್ನುಂಟುಮಾಡಿಕೊಳ್ಳಬೇಕಾದ್ದೂ, ತನ್ಮೂಲಕ ಜ್ಞಾನವನ್ನೂ ಶಾಂತಿಯನ್ನೂ
ಪಾದಿಸಿಕೊಳ್ಳಬೇಕಾದ್ದೂ ಆತನ ಕರ್ತವ್ಯವಾಗಿರುವುದು. ಈ ಕರ್ತವ್ಯವನ್ನು
ಗಿ ನೆರವೇರಿಸಲು ಸಂಗೀತವು ಉತ್ತಮವಾದ ಸಾಧನವೆನ್ನಬಹುದು. ಗಾನವು
ನುಷ್ಯನ ಹೃದಯವನ್ನು ಹೊಕ್ಕು ಭಾವಗಳನ್ನು ಉದ್ರೇಕಗೊಳಿಸಿ, ಮನಸ್ಸನ್ನು
ಯವಸ್ತುವಿನೊಂದಿಗೆ ಐಕ್ಯಗೊಳಿಸುವುದು. ಹೀಗಾದುದರಿಂದಲೇ ಕಬೀರ,
ಕಾರಾಮ, ಪುರಂದರ, ಕನಕ ಇತ್ಯಾದ್ಯನೇಕ ಭಗವದ್ಭಕ್ತರು ಭಕ್ತಿರಸಭರಿತ
ಗಿಯೂ ಗಂಭೀರವಾಗಿಯೂ ಇರುವ ತಮ್ಮ ಮನೋಭಾವಗಳನ್ನು ಗೀತಗಳಲ್ಲಿ
ಚಿಸಿ, ಅವುಗಳ ಪ್ರಚಾರದಿಂದ ಆತ್ಮೋದ್ಧಾರವನ್ನೂ ಲೋಕೋಪಕಾರವನ್ನೂ
ಧಿಸಿರುವರು. ಭಕ್ತವರೇಣ್ಯರಾದ ಅವರೆಲ್ಲರು ಪರಂಧಾಮವನ್ನೈದಿ ಬಹಳ ಸಮಯ
ದರೂ ಮೃದುಮಧುರವಾಗಿಯೂ ಭಾವಭರಿತವಾಗಿಯೂ ಇರುವ ಅವರ ಕೀರ್ತನೆಗಳು
ಹೊತ್ತಿನ ವರೆಗೂ ಸ್ತ್ರೀಪುರುಷ ಆಬಾಲವೃದ್ಧರವರೆಗೆ ಹಲವರ ಬಾಯಲ್ಲಿ ನಲಿದಾಡಿ
ಂದದಾಯಕಗಳಾಗಿ ಇರುವವಲ್ಲವೆ?

ಇರಲಿ. "ನಮ್ಮ ಪೂರ್ವಜರು ರಚಿಸಿರುವ ಬೇಕಾದಷ್ಟು ಕೀರ್ತನೆ
ರುವಾಗ ನೂತನ ಕೀರ್ತನೆಗಳ ಸೃಷ್ಟಿಯು ಅವಶ್ಯವೆ?" ಎಂಬುದು ಕೆಲವರ
ೇಪ. ಆದರೆ ಹಿರಿಯರು ಮಾಡಿಟ್ಟ ಬದುಕು ಧಾರಾಳವಿರುವ ಮಾತ್ರಕ್ಕೆ,
ನು ಸೋಮಾರಿಯಾಗಿ, ಅದನ್ನೇ ವ್ಯಯಗೊಳಿಸಬೇಕೆಂದೂ ಸ್ವಾರ್ಜಿತವೇನನ್ನೂ
ಡಿಸಬಾರದೆಂದೂ ಹೇಳುವುದು ಸರಿಯೆ? ಹಾಗೆಯೇ ಮೇಲಿನ ಆಕ್ಷೇಪಣಾದರೂ

ಅಸಮಂಜಸವಾಗಿದೆ ಹಳೆಯದನ್ನು ಕಾಪಾಡಿ ಇಡುವುದಲ್ಲದೆ ಹೊಸ
ಸಂಗ್ರಹಿಸಬೇಕಾದ್ದು ಪ್ರಗತಿಯ ಲಕ್ಷಣವಾಗಿದೆ. ಈ ಬುದ್ಧಿಯಿಂದ, ನನ್ನ ವಿ
ಕಾಲದಲ್ಲಿ, ಈ ಚಿಕ್ಕ ಪುಸ್ತಕದೊಳಗಿನ ಇವೇ ಕೆಲವು ಕೀರ್ತನೆಗಳನ್ನು ರಚಿಸಿ
ತತ್ತ್ವಬೋಧಕಗಳಾದ ಕೆಲವು ಹಾಡುಗಳನ್ನು ಬಿಟ್ಟು, ಇದರೊಳಗಿನ ಇತರ
ಗೀತಗಳು ಶ್ರೀ ಮಹಾವಿಷ್ಣು ಸಂಬಂಧವಾದ ಸ್ತೋತ್ರಗಳು, ಪ್ರಾರ್ಥನೆಗಳು ವ
ಭಜನೆಗಳು. ಕನ್ನಡರೀತಿಯ ಭಜನೆಗಳು ತೀರಾ ವಿರಳ. ಈ ಕುಂದನ್ನು ಸಾಧ್ಯವಿ
ಮಟ್ಟಿಗೆ ನಿವಾರಿಸಬೇಕೆಂಬುದಕ್ಕಾಗಿ ರಚಿಸಲ್ಪಟ್ಟ ಹೊಸಮಾದರಿಯ ಭಜನೆಗ
"ತುಂಡುಪದ"ಗಳ ವಿಭಾಗದಲ್ಲಿ ಸೇರಿಸಿರುವೆನು. ಭಕ್ತಿಪ್ರೇರಿತವಾಗಿ ರಚಿಸಲ್ಪಟ್ಟ
ಪುಟ್ಟ ಅಂಜಲಿಯನ್ನು ಗುಣಗ್ರಾಹಿಗಳೂ ಸದಯಹೃದಯರೂ ಆದ ಕನ್ನಡಿ
ಸಾದರದಿಂದ ಸ್ವೀಕರಿಸಬೇಕಾಗಿ ಪ್ರಾರ್ಥಿಸುವೆನು.

ಈ ಪುಸ್ತಕರಚನೆಯಲ್ಲಿ ಉಪಯುಕ್ತ ಸೂಚನೆಗಳನ್ನಿತ್ತು ಸಹ
ಮಾಡಿದ ನನ್ನ ಹಿತೈಷಿಗಳಾದ ಮಹಾಶಯರಿಗೂ ಭಾಷಾಪ್ರೇಮದಿಂದ ಇ
ತಮ್ಮದಾಗಿ ಮಾಡಿಕೊಂಡು, ಅಂದವಾಗಿ ಮುದ್ರಿಸಿ, ಪ್ರಕಾಶಮಾಡಿದ ಇ
ಹರಿಹರ ಛಾಪಖಾನೆಯ ಅಧಿಕಾರಿಗಳಿಗೂ, ನನ್ನ ಹೃತ್ಪೂರ್ವಕವಾದ ವಂದನೆಗ
ಅರ್ಪಿಸುವೆನು

— ಇತಿ —

ಪುತ್ತೂರು,
ತಾರೀಕು ೧-೯-೧೯೩೦.

ಸಜ್ಜನ ವಿಧೇಯ,

ಜಿ. ಎನ್. ಲಕ್ಷ್ಮಣ ಶೈ

# "ಕೀರ್ತನಾಂಜಲಿ"ಯ ವಿಚಾರವಾಗಿ ಕೆಲವು ಅಭಿಪ್ರಾಯಗಳು

ಶ್ರೀ. ಗೋವಿಂದ ಪೈಗಳು, ಬಿ. ಎ, ಮಂಜೇಶ್ವರ:– ". . . . .
ಗಳು ಬಲು ಚಲೋದಾಗಿವೆ. ಭಕ್ತಿಯಿಂದ ತುಳುಕುತ್ತಿಲಿವೆ. ಎದೆ ತುಳುಕಿಸುತ್ತ
ಇವು ಓದುವವರ ಸಾಧನೆ ಆರಾಧನೆಗಳಿಗೆ ಉಪಕಾರಿಯಾಗಲೆಂದೂ ಕನ್ನಡಿಗರ
ಕ್ಕೆ ಪಾತ್ರವಾಗಲೆಂದೂ ಹಾರೈಸುತ್ತೇನೆ . . ."

ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದೂರ್ ಶ್ರೀ. ರಾ| ನರ
ಹಾಚಾರ್ಯರು. ಎಮ್. ಎ., ಎಮ್. ಆರ್. ಎ. ಎಸ್. ಬೆಂಗಳೂರು:–
. . . ಹಾಡುಗಳ ಭಾವವು ಭಕ್ತ್ಯುಜ್ಜ್ವಲವಾಗಿಯೂ ಶೈಲಿ ಮೃದುಮಧುರ
ಯೂ ಇವೆ ನಿಮ್ಮ ಕವಿತೆ ಉತ್ತರೋತ್ತರ ಶ್ಲಾಘ್ಯತೆಯನ್ನು ಭಗವದನುಗ್ರಹದಿಂದ
ದು ಮೆರೆಯಲಿ ಎಂದು ಹಾರೈಸುತ್ತೇನೆ. . . . . . ."

ಶ್ರೀ. ಮಾಸ್ತಿ ವೆಂಕಟೇಶ ಐಯಂಗಾರರು ( 'ಶ್ರೀನಿವಾಸ' )
. ಎ, ಬೆಂಗಳೂರು:– " . . . . . . ಕೃತಿಗಳು ಚೆನ್ನಾಗಿವೆ ತಮ್ಮ
ಗಳನ್ನೆಲ್ಲ ಸೇರಿಸಿ ತಕ್ಕಮಟ್ಟಿಗೆ ದೊಡ್ಡದಾದ ಒಂದು ಪುಸ್ತಕವನ್ನು ಪ್ರಕಟಿಸಿದರೆ
ಗಾದೀತು. . . . . ."

THE HINDU, Madras:- "The author in this book has
en us some songs which are both devotional and
alising. These musical verses are suitable for young
in schools to sing as their prayer songs . . . ."

ಜಯಕರ್ಣಾಟಕ, ಧಾರವಾಡ:—"ಭಕ್ತಿರಸದ ತೊರೆಯು ಬತ್ತಿರುವ
ತೋರುವ ಈ ಕಾಲದಲ್ಲಿ ಬರಿಯುಸುಬಿನಲ್ಲಿ ಕೆಲವಾದರೂ ಒರತೆಗಳು ಅಲ್ಲಲ್ಲಿ ಇರ
ವೆಂಬದಕ್ಕೆ ಈ ಚಿಕ್ಕ ಪುಸ್ತಕವೂ ಅದರ ಕರ್ತೃಗಳೂ ಸಾಕ್ಷಿ. . . . . . . . ಕೀರ್ತ
ವಿಷಯದಲ್ಲಿ ದಾಸಪರಂಪರೆಯಂತೆ ಹರಿಯ ನಾಮಗುಣಕಥನವೂ ಲೇಖನಪದ್ಧತಿಯ
ಇಂದಿನ ಸರಳ ಶುದ್ಧ ಶೈಲಿಯೂ ಇವೆ. . . . . . ."

ಸತ್ಯವಾದಿ, ಮೈಸೂರು:— ". . . . ಎಲ್ಲಾ ಕೀರ್ತನೆಗಳೂ ಸುಲ
ವಾಗಿ ಬರೆಯಲ್ಪಟ್ಟಿವೆ. . . . . . . ."

ಕರ್ಮವೀರ, ಧಾರವಾಡ:— ". . . . . . ಕನಕದಾಸ, ಪುರಂದರದ
ಮುಂತಾದ ದಾಸಶಿರೋಮಣಿಗಳ ಕೀರ್ತನೆಗಳಂತೆ ಶ್ರೀ. ಪೈಯವರು ಭಗವಂತನ ಕಥ
ರೂಪವಾದ ಭಕ್ತಿರಸಪೂರಿತವಾದ ಪದಗಳನ್ನೂ ಭಗವನ್ನಾಮರೂಪವಾದ ಕೀರ್
ಗಳನ್ನೂ ಬರೆದಿದ್ದಾರೆ. . . . . . ಎಲ್ಲರೂ ಈ ಕೀರ್ತನಾಂಜಲಿಯನ್ನು ಕೊ
ಶ್ರೀ. ಪೈಯವರನ್ನು ಪ್ರೋತ್ಸಾಹಿಸಬೇಕಾಗಿ ಬೇಡಿಕೆ."

ಸ್ವದೇಶಾಭಿಮಾನಿ, ಮಂಗಳೂರು:—". . . . . ಭಜನೆಯಲ್ಲಿ ವ
ವಲ್ಲದೆ ಏಕಾಂತದಲ್ಲಿ ಕೂಡ ಮನಸ್ಸಿನಲ್ಲಿಯೇ ಅಂದುಕೊಳ್ಳಬಹುದಾದ ಕವಿತೆ
ಇವೆ. ಭಾಷೆಯು ಲಲಿತವಾಗಿದೆ."

# ಆದಿಪದ ಸೂಚಿಕೆ



"ಶಂಖಚಕ್ರಧರಾ, ಸುಖಕರಾ, । ಪಂಕಜಾಕ್ಷ, ಧರಾವಿಹಾರಾ, ।
ವೆಂಕಟೇಶ, ವೇದಾಂತಸಾರಾ, । ಸಂಕಟವಿದಾರಾ, ಉದಾರಾ" ॥

—ಕೀರ್ತನಾಂಜಲಿ



॥ ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ ॥

ಶ್ರೀ ಗಣೇಶಾಯ ನಮಃ ॥ ಶ್ರೀ ಗುರುಭ್ಯೋ ನಮಃ ॥

## ॥ ಮಂಗಲಾಚರಣಂ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥ ೧ ॥

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ ।
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ ॥
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ ।
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ ॥ ೨ ॥



॥ ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ ॥

ಶ್ರೀ ಗಣೇಶಾಯ ನಮಃ ॥ ಶ್ರೀ ಗುರುಭ್ಯೋ ನಮಃ ॥

## ॥ ಮಂಗಲಾಚರಣಂ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ |
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ‖ ೧ ‖

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ |
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ ‖
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ |
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ ‖ ೨ ‖

# ಕೀರ್ತನಾಂಜಲಿ

೧

ರಾಗ: ಕಮಾಚ್—ಆದಿತಾಳ

(ಪಾಲಿಸು ಪಂಕಜದಳನಯನಾ) ಎಂಬಂತೆ

ಶ್ರೀ ಕಮಲೋದ್ಭವಪಿತ, ಶ್ರೀಶಾ | ಶ್ರೀಕರ, ಗುಣಭೂಷಾ ‖ ಪಲ್ಲ ‖
ಹೇ ಕರುಣಾಂಬುಧಿ, | ಸಜ್ಜನಪೋಷಾ, |
ಶೋಕತಮೋಹರ, | ಜಯಜಗದೀಶಾ ‖ ಅನುಪಲ್ಲ ‖

ಕಮಲವದನ, ಕಮ | ಲಾವರ, ರವಿಶಶಿನೇತ್ರಾ, | ದೇವಾ, |
ಕಮಲನಾಭ, ಕೌ- | ಸ್ತುಭಧರ, ಸುರುಚಿರಗಾತ್ರಾ, ‖
ಅಮರಪ್ರಮುಖ, ಸುಮ | ನೋಹರ, ಸುಂದರ, |
ತಮಹರ, ಮಂದರ | ಧರ, ಕರಿವರದಾ ‖ ೧ ‖

ವೇದವೇದ್ಯ, ತ್ರಿಗು | ಣಾತ್ಮಕ, ಮಾಯಾತೀತಾ, | ನಾಥಾ, |
ಭೇದಭೇದ್ಯ, ವಿ- | ಶ್ವಂಭರ ಲಕ್ಷ್ಮಣವಿನುತಾ, ‖
ಆದಿರಹಿತ, ಜಗದಾದಿ | ಪುರುಷ, ಮಧು |
ಸೂದನ ಖಳಮ- | ರ್ದನ, ಫಣಿಶಯನಾ ‖ ೧ ‖

---

ರಾಗ: ಧನಾಶ್ರೀ — ತಾಳ: ದಾದರಾ

(ಮೂರ್ತಿಮಂತ ಭೀತಿ ಉಭೀ) ಎಂಬಂತೆ

ದೀನಪಾಲ ದಾನಶೀಲ | ಪಾಲಿಸೆನ್ನ ಮಾಧವಾ |
ದಿನನಾದೆ ಬಡತನದಾ | ದುಗುಡದಿಂದ ಕೇಶವಾ || ಪಲ್ಲ ||

ಏನಗೈದರೇನು? ಕ್ಷೇಮ | ವೇನು ಕಾಣೆ ಲೋಕದಿ |
ಹೊನ್ನು ಮುಟ್ಟಲಲ್ಲಿ ಮಣ್ಣು | ಎನ್ನ ಪೂರ್ವಕರ್ಮದಿ || ೧ ||

ಎಲ್ಲಿ ಹೋದರಲ್ಲಿ ಸೋಲ | ವಕಟ ಗೆಲುವ ಕಾಣೆನು |
ಕಳ್ಳನಂತೆ ಕಾಂತಿಹೀನನಾದೆ | ಸಲುವ ಕಳೆದನು || ೨ ||

ಹೊಟ್ಟೆ ಹೊರೆಯಲೆನಿತೊ ಮಂದಿ | ಯೊಡನೆ ಸಾಲಮಾಡಿದೆ |
ಕೊಟ್ಟು ಕೆಟ್ಟರವರು ಹಣವ | ಕೇಳೆ ಮಾತ ತಪ್ಪಿದೆ || ೩ ||

ಗಂಟು ತಿಂಬ ತುಂಟ, ಕಂಬ | ದಂತೆ ನೆಟ್ಟಗಿದ್ದರು |
ಕಂಟಕನಿವ ಬುವಿಗೆ ಭಾರ | ವೆಂದು ಎನ್ನ ಜರೆವರು || ೪ ||

ಮಡದಿಮಕ್ಕಳೆನ್ನ ನೋಡಿ | ದೃಷ್ಟಿಯೋರೆಮಾಳ್ಪರು |
'ಜಡನು ಪಾಪಕರ್ಮಿಯೆ'ಂದು | ಜಡದೆ ಹಳಿದು ಮುಳಿವರು || ೫ ||

ಕಷ್ಟಪಟ್ಟೆ ಮಾನಗೆಟ್ಟೆ | ಹೀನನಾದೆ ಜನರೊಳು |
ಭ್ರಷ್ಟನಾದೆ ನೀತಿತಪ್ಪಿ | ಕೆಟ್ಟೆನಯ್ಯೊ ಜಗದೊಳು || ೬ ||

ಸಿರಿಯರಮಣ ನಿನ್ನ ವಿಮಲ | ಚರಣಗಳಿಗೆ ಮಣಿವೆನು |
ಹರಿಸು ಪಾಪಚಯವ ದೇವ | ಕರುಣಿಸಯ್ಯ ದಯೆಯನು || ೭

---

೩

ರಾಗ: ಕಾಂಬೋದಿ—ತಾಳ: ಝಂಪೆ
(ಏನ ಬೇಡಲಿ ನಿನ್ನ ಬಳಿಗೆ ಬಂದು) ಎಂಬಂತೆ

ಬಾಳಲೆಂತುಟೊ ನಿನ್ನ ನಂಬಿ ಸಿರಿಯೊಡೆಯಾ |
ಗೋಳಿಡಲು ಎನ್ನ ಮೇಲ್ ತೋರದಿರೆ ದಯೆಯಾ || ಪಲ್ಲ |

ಅಂದು ಕರಿರಾಜ ಮೊರೆಯಿಡಲು ಸಂರಕ್ಷಿಸಿದೆ |
ಕಂದ ಪ್ರಹ್ಲಾದ ಪ್ರಾರ್ಥಿಸಲವನ ಕಾಯ್ದೆ ||
ಇಂದುಮುಖಿ ದ್ರೌಪದಿಯು ಕೂಗಲವಳನು ಪೊರೆದೆ |
ಹಿಂದಿನಾ ಕರುಣೆ ನಿನಗಿಂದಿಲ್ಲವೇನೊ || ೧ ||

ಧನಕನಕವಸ್ತುಗಳು ವನಿತೆಯರು ಸ್ಥಿರವೆಂದು |
ನೆನೆದು ಮನದೊಳಗಿಂದ್ರಿಯಂಗಳ ವಶನಾಗಿ ||
ಗಣನೆಯಿಲ್ಲದ ಪಾಪಕರ್ಮಗಳ ಗೈಯಲೇಂ? |
ವಿನಯದಿಂ ನಿನಗೀಗ ಶರಣುಬಂದಿರಲು || ೨ ||

ಎಲ್ಲ ಧರ್ಮವ ಬಿಡಲದೇಂ? ಪಾಪಿಯಿರಲದೇಂ? |
ಬಲ್ಲಿದನ ತನ್ನ ನಂಬಲು ಭಕ್ತನವನಾ ||

ಎಲ್ಲ ಪಾಪವ ಕಳೆವೆನೆಂದು ನೆರನಿಗೆ ಪೇಳ್ದ |
ಸೊಲ್ಲಿನಾ ಸಾರ್ಥಕ್ಯವೆಲ್ಲಿ?—ಜಗದೀಶಾ ‖ ೪ ‖

---

೮

ರಾಗ: ಯಮುನ್—ತಾಳ: ದುಮಾಳಿ

(ಸಖಿ ತಾ ಕಾಣುವಳು) ಎಂಬಂತೆ

ಪರಮೇಶಾ, ಈಶಾ, | ನಿನ್ನ ನಾಮ |
ಮಧುರವೈ | ಅತಿ | ಮಧುರವೈ ‖ ಪಲ್ಲ ‖

ಉನ್ನತಿಯೊಳು ಮೇಣ್ | ಅವನತಿಯೊಳು ನಾಂ |
ದೈನ್ಯಭಾವದಿಂ | ನಿನ್ನನು ಭಜಿಸಲು |
ವರವ ನೀಡೈ | ದಯವ ಮಾಡೈ |
ವರದಾತನೇ | ಮಮ ಪ್ರೀತನೇ ‖ ೧ ‖

ಸಂಪದದೊಳು ಮೇಣ್ | ಆಪದದೊಳು ನಾಂ |
ಇಂಪುಗಾನದಿಂ | ನಿನ್ನನು ನುತಿಸಲು |
ವರವ ನೀಡೈ | ದಯವ ಮಾಡೈ |
ಸುರಪಾಲನೇ | ಶ್ರೀಲೋಲನೇ ‖ ೨ ‖

---

೫

ರಾಗ: ಸಿಂಧಭೈರವಿ—ತಾಳ: ಕೇರವಾ
(ನಾ ಕರ ಮುಗಿವೆ ಬಂಧುಗಳೆ) ಎಂಬಂತೆ

ನಾಂ ಪ್ರಾರ್ಥಿಪೆನು ಜಗದೀಶಾ, | ಲಕ್ಷ್ಮೀಶಾ, ಪಾಲಿಸೈ ‖ ಪಲ್ಲ

ಭವಬಂಧನವನ್ನಾದರಿಸಿ, |
ತವ ಸಾಮೀಪ್ಯ ರಣೆಯ ತ್ಯಜಿಸಿ, |
ತವೆ ವಿಷಯಗಳೊಳ್ ಮನ ಚಲಿಪುದಕಟ | ಲಕ್ಷ್ಮೀಶಾ ಪಾಲಿಸೈ ‖ ೧

ಮಂದರಗಿರಿಧರ ಸರ್ವೇಶಾ |
ಸುಂದರ ಮುರಹರ ಪರಮೇಶಾ |
ಕಂದನ ದಯದಿಂ ಪರಿಗ್ರಹಿಪುದಯ್ಯ | ಲಕ್ಷ್ಮೀಶಾ, ಪಾಲಿಸೈ ‖ ೨

---

೬

ರಾಗ: ಪೀಲು ಕಾಲಂಗಡಾ—ತಾಳ: ಉಗಡಾ
(ಏಕ ದಿನ್ ಜಾನಾರೆ ಭಾಯಿ) ಎಂಬಂತೆ

ದಿಟದಿಂ ಸಾಯಲಿರುವೆ ನೋಡು | ಮನುಜಾ |
ವಿಠಲಭಜನೆ ಮಾಡು ‖ ಪಲ್ಲ ‖
ಹೊತ್ತಿಹೆ ಮಮಕಾರವನವಿದ್ಯೆಯಿಂ |
ಸತ್ವವ ತಿಳಿಯದೆ ಮೂಢಾ ‖

ಮೃತ್ಯು ನರ್ತಿಸಳು ನಿನ್ನ ಬೆನ್ನಮೇಲ್ ।
ಹೊತ್ತುಗಳೆಯಬೇಡಾ ॥ ೧ ॥

ದೇಹಾತ್ಮಕಬುದ್ಧಿಯ ತೊರೆಯುತೆ ನಿ ।
ನ್ನಾತ್ಮತತ್ತ್ವವನು ನೋಡು ॥
ಮೋಹವ ಕಳೆಯುತಪಾರ ಸೌಖ್ಯಸಂ ।
ದೋಹದಿ ನಲಿದಾಡು ॥ ೨ ॥

ಕರ್ಮಯೋಗದಾ ಮರ್ಮವರಿತು ಹಿತ ।
ಕರ್ಮಗಳನೆ ಮಾಡು ॥
ಧರ್ಮ ಜ್ಞಾನ ವೈರಾಗ್ಯದೊಳಭವನ ।
ನೇಮದಿ ಕೊಂಡಾಡು ॥ ೩ ॥

ವ್ಯಕ್ತಾವ್ಯಕ್ತ ಪರಾತ್ಪರಮೂರ್ತಿಯ ।
ಚಿಂತನೆಯನು ಮಾಡು ॥
ಸತ್ಯವಂತನಾಸಂತನ ಧ್ಯಾನದಿ ।
ಶಾಂತಿವಧುವ ಕೂಡು ॥ ೪ ॥

---

೭

(ಶರ ವಿಚಿತ್ರ ಚೌಪದಿ)

ಕಲಿಕಲ್ಮಷಚಿತ್ತಗೆ ಪಾಪದ ಧನ ।
ದಲಿ ಜೀವಿಪನಿಗೆ ವಿಹಿತವಹ ॥

ಸಲೆ ಕರ್ಮವಿಹೀನಗೆ ಗೋವಿಂದನ |
ಸುಲಲಿತ ಕೀರ್ತನವೇ ಗತಿಯು ‖ ೧ ‖

ಗೋವಿಂದಂ—ಇದೆ ಸ್ನಾನವು ಸಂತತ |
ಗೋವಿಂದಂ—ಇದೆ ಜಪವು ಸದಾ ‖
ಗೋವಿಂದಾ—ಇದೆ ಧ್ಯಾನವನವರತ |
ಗೋವಿಂದನ ಕೀರ್ತನವು ಸದಾ ‖ ೨ ‖
(ಸಂಸ್ಕೃತ ಶ್ಲೋಕಗಳೆರಡರ ಅನುವಾದ)

---

೮

ರಾಗ: ಬೇಹಾಗ್—ಆದಿತಾಳ
(ಕಡು ಧೀರನೆ ಶೂರನೆ) ಎಂಬಂತೆ

ರಘುರಾಮನ ಜಗದಭಿ | ರಾಮನ ನಾಮವ |
ಸ್ಮರಿಸಬೇಕು | ಮನುಜಾ | ಸ್ಮರಿಸಬೇಕು ‖ ಪಲ್ಲ |

ಕಡು ದಾರಿದ್ರ್ಯದಿ ಬಳಲುವದೇಕೆ? |
ಜಡನೆನಿಸುತೆ ದಿನ ಕಳೆಯಲುಬೇಕೆ? |
ಬಡತನವನು ನಿರ್ಮೂಲವ ಗೈಯಲು—ಸ್ಮರಿಸಬೇಕು ‖ ೧ |

ವಿಷಯಾಸಕ್ತಿಯ ದಾಹವದೇಕೆ? |
ವ್ಯಸನದಿ ಮನದೊಳು ಕೊರಗುವುದೇಕೆ? |
ಜಪದಿಂ ಮನದಾ ಕಲಿಮಲ ಕಳೆಯಲು—ಸ್ಮರಿಸಬೇಕು ‖ ೨

ಕೆಡುಕುತನದೊಳಜ್ಞಾನಕೆ ಸಿಲುಕಿ, |
ಕಡು ಮೋಹದಿ ಭವಶರಧಿಯೊಳಳುಕಿ, |
ಕೆಡಲೇತಕೆ ಹೃತ್ತಾಪವ ನೀಗಲು—ಸ್ಮರಿಸಬೇಕು || ೩ ||

ಗಳಿಸುತೆ ಜ್ಞಾನವ, ಧರ್ಮವ ತಿಳಿದು, |
ತಳೆಯುತ ಯೋಗವ, ಕರ್ಮವ ತರಿದು, |
ಬಲುಶಾಂತಿಯ ಸನ್ಮುಕ್ತಿಯ ಪಡೆಯಲು—ಸ್ಮರಿಸಬೇಕು || ೪ ||

---

೯

ರಾಗ: ಮುಖಾರಿ — ತಾಳ: ಝಂಪೆ
(ಯಾಕೆನ್ನೊಳಿಂತು ಕೃಪೆಯಿಲ್ಲ) ಎಂಬಂತೆ

ಬರಿದೆ ನೀನಿಹಲೋಕ ಸೌಖ್ಯಕೆ ಕೆಡಬೇಡಾ |
ಪರಮ ಪರಮಾರ್ಥ ಸುಜ್ಞಾನವನು ಗಳಿಸೈ || ಪಲ್ಲ ||

ಧರಿಸಿಕೊಳ್ಳುವ ಧೋತರವು ನಿನ್ನದಾದರೂ |
ಅರಿಯೆ ನೀಂ ಧೋತರವದಲ್ಲವದರಂತೆ ||
ನರನೆ! ನಿನ್ನಾ ದೇಹ ನಿನ್ನದಾದರು ನೀನೆ |
ಬರೆಯು ದೇಹವದಲ್ಲವೆಂಬುದನು ತಿಳಿಯೈ || ೧ ||

ಜನನಮರಣಗಳು ಸಲೆ ರೋಗರುಜೆಗಳು ನಿನ್ನ |
ತನುವಿಗಲ್ಲದೆ ಬೇರೆ ನಿನಗಲ್ಲವೆನಲು ||

ತನು ಬೇರೆ ನೀಂ ಬೇರೆಯೆಂಬುವೀ ತತ್ತ್ವವನು |
ಮನದೊಳಗೆ ತಿಳಿದು ಸತ್ಯಾಂಶವನ್ನರಿಯೈ ‖ ೨ ‖

ನಿನ್ನೊಳಿರ್ಪಾತ್ಮನೇ ನೀನು ಪರಮಾತ್ಮನಾ |
ಭಿನ್ನರೂಪನನಂತನಧಿಕಪ್ರಕಾಶ ‖
ಮುನ್ನ ನೀನಿದನರಿತು ಚಪಲಸುಖವಿಚ್ಛಿಸದೆ |
ಚೆನ್ನ ಶ್ರೀಹರಿಯನನುದಿನ ಬಿಡದೆ ನೆನೆಯೈ ‖ ೩ ‖

---

## ೧೦

(ಭೋಗ ವಿಚಿತ್ರಚೌಪದಿ)

ಎನ್ನ ಜೀವಕಧಿಕ ಮುದವ
ಎನ್ನ ಮನಕೆ ಶಾಂತತನವ
ಎನ್ನ ಮತಿಗೆ ತೀಕ್ಷ್ಣಗತಿಯನೀವುದಾವುದು?
ಚೆನ್ನವಾಗಿ ತಿಳಿಯಲೆನ್ನ ಚಿತ್ತವೇಳ್ವುದು

ಕರಣಗಳಲಿ ನಲವನಿರಿಸಿ
ಹರಣದಲ್ಲಿ ಗೆಲವ ಬೆರಸಿ
ಸರಸದಿಂದ ಹರುಷದಿಂದ ಜೀವದಿರವದು
ಭರದಿ ಸಾಗುವಂತೆ ಮಾಳ್ಪ ಬಲವದಾವುದು?

ಮನದ ಕಡಲಿನಾಳ ಸೇರ್ದು
ಎಣಿಸಲಾನು ಕುತುಕಗೊಂಡು

ಮಿನುಗುವೊಂದು ಪ್ರಭೆಯ ಹೃದಯದೊಳಗೆ ಕಂಡೆನು
ಎಸಲುಬಾರದಿರುವ ಪರಿಯ ಸವಿಯನುಂಡೆನು

ಅಂತರಂಗದೊಳಗೆ ಹೊಳೆವ
ಸಂತ ಶಾಂತ ತೇಜ ಮೆರೆವ
ಅಂತರಿಕ್ಷದಲ್ಲಿ ಮೇಲೆ ಮೇಲೆಯಿಹುದನು
ಅತ್ತಲಿತ್ತ ಸುತ್ತಮುತ್ತಲಿಹುದನರಿತೆನು

ಕೆಳಗೆ ಕೆಳಗೆ ಪಾದತಳದೆ
ಇಳಿದು ಪಸರಿಸಿಹುದ ಕಂಡೆ
ತಿಳಿದು ತಿಳಿಯದಾದೆನದರ ಆದಿಯಂತ್ಯವ
ತಿಳಿದು ತಿಳಿಸಲಾರೆನದರ ಸುಪ್ರಭಾವವ

ಬೆಳಕದೊಂದೆ ರೂಪುದೋರಿ
ಬಳಸಿ ಬೆಳೆದು ಮೇರೆ ಮೀರಿ
ತುಳುಕಿ ಹೊಳೆಯುತಿರಲು ವಿಸ್ಮಯವನು ತಳೆದೆನು
ಕಳೆದು ದ್ವೈತಭಾವವೈಕ್ಯಭಾವ ತಾಳ್ದೆನು

ಕಾಲಭೇದವನ್ನು ನೀಗಿ
ಸ್ಥೂಲಸೂಕ್ಷ್ಮಸಿಸ್ತುವಾಗಿ
ಮೂಲರೂಪದಿಂದ ನಲಿದು ಕಳೆಯನೀಯುವ
ಬಾಳ ತೇಜನದನು ತಿಳಿದು ತಳೆದೆ ಮೋದವ

ಆತ್ಮವೆಂದು ಬ್ರಹ್ಮವೆಂದು
ಜ್ಯೋತಿಯದನು ಕರೆವರಿಂದು
ಬುದ್ಧಿಯಿಂದಲದನು ತಿಳಿವ ನರನು ಧನ್ಯನು
ಶುದ್ಧನವನು ಜ್ಞಾನಹೊಂದಿ ಪೂತನಪ್ಪನು

ಸರಸೆ ಆತ್ಮ ಜ್ಯೋತಿಯಾಂತು
ಪರಮ ಪುರುಷನಿರುವನರಿತು
ಸ್ಥಿರದ ಸತ್ಯವಸ್ತುವದನು ಮಾಡೆ ಧ್ಯಾನವ
ನರನು ಯೋಗವಾಂತು ಪಡೆವ ನಿತ್ಯಧಾಮವ

---

೧೧

(ವೀರಚೌಪದಿ)

ಕರ್ಮದಿಂ ಬ್ರಾಹ್ಮಣತೆ ಬರ್ಪುದಲ್ಲದೆ ಜಾತಿ |
ನಿರ್ಮಲತೆ ಕುಲಗೋತ್ರದಿಂ ಬರ್ಪುದಿಲ್ಲಂ || ಪಲ್ಲ ||

ಧಾರ್ಮಿಕ ಮುನೀಶ್ವರರು ಹೀನಯೋನಿಯೊಳೊಗೆದು |
ಕರ್ಮಬಲದಿಂ ಪೂಜ್ಯರಾಗಿರ್ಪರೆನಲು ||ಅ.ಪ||

ಗಣಿಕೆಯಾ ಗರ್ಭದಿ ವಶಿಷ್ಠನತಿ ಮಾದಿಗಳ |
ತನುವಿಂ ಮತಂಗ ಶಶಕಿಯ ಜಠರದಿಂದ ||
ವಿನುತ ಗೌತಮನು ರಜಕೆಯೊಳು ನಾರದನು ಮೇಣ್ |
ಶುನಕೆಯೊಳು ಶೌನಕನು ಪುಟ್ಟಿರ್ಪರೆನಲು || ೧ ||

ಮತ್ಸ್ಯಜೀವಿಕೆಯೊಳು ವ್ಯಾಸ ಪಿಣ್ಗಕ್ರಿಯೊಳು |
ಖ್ಯಾತ ಗಾರ್ಗೇಯ ಮೃಗದೊಳು ಋಷ್ಯಶೃಂಗಂ ||
ಮತ್ತೆ ಮಂಡೂಕಿಯೊಳು ಮಾಂಡವ್ಯ ಹರಿಣಿಯೊಳು |
ಸ್ತುತ್ಯ ಜಾಬಾಲಿ ತಾವ್ ಪುಟ್ಟಿರ್ಪರೆನಲು || ೨ ||

---

## ೧೨



(ವೀರಚೌಪದಿ)

ಬಾಲನಾಗಿರಲೇನು? ಮುದುಕನಾಗಿರಲೇನು? |
ಕೀಳನಾಗಿರಲೇನು? ದ್ವಿಜನಿರಲದೇನು? ||
ಕೂಲಿಯುವನಿರಲದೇಂ? ಧನಿಕನಾಗಿರಲೇನು?
ಮೇಲಾದ ಭಕ್ತವರರುತ್ತಮರು ಹರಿಗೆ || ೧ ||

ಧ್ರುವನೇನು ಮುದುಕನೇ? ಶಬರಿಯೇನುತ್ತಮಳೆ? |
ಅವಲೋಕಿಸಲು ಕುಚೇಲನು ತಾಂ ಧನಿಕನೆ ||
ಅವರಿಗಾತನು ಮುಕ್ತಿಯನು ಕರುಣಿಸಿಹನೆನಲು |
ತವಕಗೊಳುವನು ಭಕ್ತರನ್ನು ಪೊರೆಯುಲ್ಕೆ || ೨ ||

ಚಿಕ್ಕಮಗುವಾ ಧ್ರುವನ ಸದ್ಭಕ್ತಿಧ್ಯಾನಕ್ಕೆ |
ಮಿಕ್ಕಿದಾನಂದದಲಿ ತಾನಿದಿರ್ಗೊಂಡು ||

ತಕ್ಕ ತಕ್ಕುದೆಸುತ್ತ ತಕ್ಕೈಸಿ ಪ್ರೀತಿಯಲಿ |
ತಕ್ಕ ವರಪದವ ಕೈಗಿಕ್ಕಿದನು ದೇವಂ || ೩ ||

ಜಾತಿಹೀನಳು ಸೂಕ್ಷ್ಮಬುದ್ಧಿಹೀನಳು ನೋಡೆ |
ಖ್ಯಾತಿವಿರಹಿತಳಾದ ಮುದುಕಿಯಾ ಶಬರಿ ||
ಓತಿತ್ತ ಫಲಗಳನು ಕಾತರಿಸದುಚ್ಛಿಷ್ಟ |
ವಾತುರದಿ ಹರಿ ತಿಂದು ಮುಕ್ತಿಯನ್ನಿತ್ತಂ || ೪ ||

ತೀವಿದ್ದ ಬಡತನದ ಬಾವುನೋವುಗಳ ತಾಂ |
ಭಾವಿಸದೆ ಭಾವಿಸುತೆ ಹರಿಯನಾಮವನು ||
ಸೇವಿಸಲು ಭಕ್ತಿಯಿಂದಾ ಬಡಕುಚೇಲನಿಗೆ |
ಶ್ರೀವರನು ಶಾಶ್ವತದ ಸಂಪದವನಿತ್ತಂ || ೫ ||

---

## ೧೩

(ಕುಸುಮ ವಿಚಿತ್ರ ಚೌಪದಿ)

ಬಾರೆನ್ನ ಹೃದಯಮಂದಿರದರಸ! ಸರಸವನು |
ತೋರಿ ಹಿಡಿಯೈ ವೇಣುವಾ ||
ಶ್ರೀರಮಣ! ನೀನೂದುತದರ ನವಮಾಧುರ್ಯ |
ಬೀರಿ ತಣಿಸೈ ಹೃದಯವಾ || ೧ ||

ಗೋಪಿಯರ ಬಗೆಸೆಳೆದ ನವಿಯ ಮುರಲೀನಾದ |
ದಾ ಪರಿಯ ಕೇಳಲೆಂದು ||

ಗೋಪಾಲ! ತವಕಿಸುವುದೆನ್ನಂತರಂಗವಾ |
ಲಾಪನೆಯ ಮಾಳ್ಪುದಿಂದು ‖ ೨ ‖

ನಿನಗಾಗಿ ಹಲವು ರಾಗಂಗಳಿಂಪನು ನಾನು |
ಅನುನಯದಿ ಸೂಸುತಿರಲು ‖
ಎನಗಾಗಿ ನೀನೊಂದೆ ಗೀತದಿಂಚರ ಸೊಗವ |
ಉಣಿಸಲೇಂ ಕುಂದು?— ಹೇಳು ‖ ೩ ‖

ಮೌನವೇತಕೆ?— ಪುರುಷನಾಗಿ ಜನಿಸಿದುದೆನ್ನ |
ನ್ಯೂನತೆಯೆ?— ತಿಳಿಯೆ ಹೇಳು ‖
ಇನ್ನೊಂದು ಜನ್ಮದಲಿ ಹೆಣ್ಣಾಗಿ ಸೃಜಿಸೆನ್ನ |
ನಿನ್ನ ಗಾನವ ಕೇಳಲು ‖ ೪ ‖

---

## ೧೪

ರಾಗ: ಮಿಶ್ರಪೀಲು — ತಾಳ: ದಾದರಾ

ದುರಿತಹರಾ | ಪ್ರೇಮಧರಾ |
ಧುರಧುರಂಧರಾ ‖
ಕರುಣದಿ ಪೊರೆ | ಶರಣರ ದೊರೆ |
ವರ ಮನೋಹರಾ ‖ ಪಲ್ಲ ‖

ಜೀವಿತದೊಳು | ಕ್ಷೇಮವಿಲ್ಲ |
ನಲವ ಕಳೆದೆನು ‖

ಕಾವ ಬಿಸಿಲೊ | ಕಿರುವ ಲತೆಯು |
ತೆರದೊಳಾದೆನು ‖ ೧ ‖

ಸಿರಿಯನಿತ್ತು | ಬಾಳುವೆನ್ನೈ
ಸಿರಿಯು ವರ್ಧಿಸ್ಸೈ ‖
ಕರುಣಿಸೆನ್ನ | ಬಯಕೆಗಳಾ |
ಕರವ ನೋಳ್ಪುದೈ ‖ ೨ ‖

ಭಾವಶುದ್ಧಿ | ಯಿತ್ತು ಮನೋ |
ಶಾಂತಿಯ ನೀಡೈ ‖
ಸತ್ವಗುಣಪ | ನಿತ್ತು ಜ್ಞಾನ |
ವಧಿಕ ಕರುಣಿಸೈ ‖ ೩ ‖

## ೧೫

ರಾಗ: ಮಲ್ಹಾರ — ತಾಳ: ತ್ರಿವಟ

ಜಯ- ಮಾಪರ ಸುಖಕರ | ಧೀರ ಶುಭಂಕರ |
ಶ್ರೀಹರೇ ಪಾಹಿ ‖ ಪಲ್ಲ ‖

ದೇವನಿಕರ ಪೋಷಾ | ಈಶಾ ‖ಅ.ಪ‖

ಭಕ್ತರನಳಲಿಪೆ | ಬಳಲಿಪೆ ನೀನೆ |
ಶಕ್ತಿಯಿತ್ತು ಸಂ | ರಕ್ಷಿಪೆ ನೀನೆ ‖

ಮುಕ್ತಿದಾತ ನಿ | ನ್ನಂತರಂಗವಾ |
ಎಂತರಿವೆನೊ ಕಾಣೆ–ದೇವಾ || ೧ ||

---

## ೧೬

ರಾಗ: ಧನಾಶ್ರೀ — ಆದಿತಾಳ

(ಕರುಣಾಕರ ನೀ । ನೆಂಬುವದ್ಯಾಕೊ) ಎಂಬಂತೆ

ಪಾಪಿಯಹುದು ನಾ | ನಾದರು ದಯದಲಿ |
ಶ್ರೀಪತಿ! ಪೊರೆಯಯ್ಯಾ || ಪಲ್ಲ ||

ಪಾಪವ ಗೈದರು | ಪರಿತಪಿಸುತ್ತಲಿಂದು |
ಪಾಪಹರನೆ! ನಿನ್ನ | ನಾಶ್ರಯಿಸಿಹೆನ್ನೈ ||ಅ.ಪ.||

ಪರಧನಕೆಳಸಿದೆ, | ಪರಸತಿಗಳುಪಿದೆ, |
ಪರನಿಂದೆಯುನಧಿ | ಕದಿ ಗೈದೆ; ||
ನರದೇಹದ ಸುಖ | ಕಾಗಿ ನೀತಿಯ ಬಿಟ್ಟು |
ಪರಪೀಡನೆಯಲಿ | ನಿರತ ನಾನಾದೆ || ೧ ||

ದುಷ್ಟರ ಸಂಗಕೆ | ಸೇರುತಲೆಸಗಿದೆ |
ಕೆಟ್ಟ ಹೀನಕಾ | ರ್ಯಂಗಳನು; ||
ಶಿಷ್ಟರ ಬಾಧಿಸಿ, | ಅಬಲರ ಪೀಡಿಸಿ, |
ನಷ್ಟಮಾಡಿದೆನು | ಹರಯವ ಬರಿದೆ || ೨ ||

ತಂದೆತಾಯ್ಗಳಾ | ಮಾತನು ಮೀರಿದೆ, |
ಬಂಧುಬಾಂಧವರ | ಹೀಸಿಸಿದೆ; ||
ಚಂದದಿ ಕೈಗೊ | ಟ್ಟವರಿಗೆ ಮೋಸದಿ |
ಕುಂದನೆಣಿಸಿದೆ, ಕೃ | ತಘ್ನನೆನಿಸಿದೆ || ೩ ||

ಜನ್ಮದಾತನಾ | ಗಿರುತಲನುದಿನವು |
ಎನ್ನ ಹೃದಯದಲಿ | ನೆಲಸುತಲಿ ||
ಮನ್ಮನ ಪ್ರೇರಕ | ನಾಗಿ ಪಾಲಿಪಾ |
ನಿನ್ನನೆ ಮರೆಯುತ | ಅಧಮನೆನಿಸಿದೆ || ೪ ||

---

## ೧೭

**ರಾಗ: ಕಮಾಚ್ — ತಾಳ: ಧುಮಾಳಿ.**

(ರಾಮ ರಾಮ ಜಯ) ಅಥವಾ ರಾಮನಾಮ ತಾಂ) ಎಂಬಂತೆ

ಎಲ್ಲಿರುವನು ಹರಿ?— | ಪರಮಪುರುಷನವ |
ನೆಲ್ಲಿರುವನು?— ಜಗ | ದ್ವಲ್ಲಭನು? ||
ಅಲ್ಲಿ—ಯಿಲ್ಲಿ—ಯೆ | ಲ್ಲೆಲ್ಲಿಯು ತಾನಿಹ |
ನೆಲ್ಲರ ಹೃದಯದೊ | ಳಡಗಿಹನು || ೧ ||

ರವಿಯ ತೇಜದೊಳು | ಶಶಿಯ ಬೆಳಕಿನೊಳು |
ಬುವಿಯಾ ಸೊಬಗಿನೊ | ಳಿರುತಿಹನು ||

ತವೆ ಸೀರ್ ಸೆಳವಿಸೊ | ಅನಲನ ಝುಳದೊಳು |
ಪವನನ ಸುಳಿವಿಸೊ | ಳಿರುತಿಹನು || ೨ ||

ಗಗನದ ನೀರೂ | ಪತೆಯೊಳಗಿರುವನು |
ಬಗೆಯಲು ವಿಶ್ವಾ | ತ್ಮಕನೆನಿಸಿ ||
ಮಿಗೆ ಸಚರಾಚರ | ಸೂಕ್ಷ್ಮಸ್ಥೂಲಗಳೊ |
ಳೊಗುತ ತುಂಬಿ ತುಳು | ಕುತ್ತಿಹನು || ೩ ||

ಅಂತರ್ಬಾಹ್ಯದಿ | ಪೂರ್ಣಪರಾತ್ಪರ |
ಸಂತಸಂತ ತಾ | ನಾಗಿಹನು ||
ಅಂತರ್ಯದೊಳು ಸ್ವ | ತಂತ್ರನೆನಿಸಿ ಚಿತ್- |
ಶಾಂತಿಯಿಂದ ತಾಂ | ರಂಜಿಪನು || ೪ ||

---

## ೧೮

ರಾಗ: ಕಾಮೋದ—ತಾಳ: ತ್ರಿವಟ

(ಜಗದವನಾ ಬಹು ಭಾರ) ಎಂಬಂತೆ

ಸಿರಿವರನಾ ಸುರರಾಜರಾಜನಹ
ದಯಾಮಯನ ಪರಮಾತ್ಮನ ಕರುಣದಿ
ಲೋಕವು ಚಲಿಪುದು ನೋಡೆ || ಪಲ್ಲ ||

ಪ್ರತ್ಯೇಕಾತ್ಮನೊ | ಳಾತ ನೆಲಸಿ ತಾಂ |
ನಿತ್ಯ ಪ್ರೇರಿಸಿ | ಕರ್ಮಗೈಸುವನು ||

ಸತ್ಯವಿದನು ತಿಳಿ | ಯುತ್ತಲರ್ಪಿಸ ತ |
ನ್ನಾತ್ಮನ ಬುಧಸವಗೆ || ೧ ||

---

## ೧೯

ರಾಗ: ಮಾಂಡ್—ತಾಳ: ಉಗಡಾ

(ಬಾರಿ ಪಾಂಡುರಂಗಾ) ಎಂಬಂತೆ

ದೇವ ದೀನಬಂಧೋ! | ಸದ್ಗುಣಸಿಂಧೋ! |
ಕಾವುದು ಮಾಧವ! | ಕರುಣವಗೊಂಡು || ಪಲ್ಲ ||

ತಾಯಿಯು ನೀನೆ | ತಂದೆಯು ನೀನೆ |
ಕಾಯುವ ಬಂಧುವು | ಬಳಗವು ನೀನೆ || ೧ ||

ವಿಧವಿಧದಿಂದಾ | ಜೀವಿತ ಸಾಗಿಪ |
ವಿಧಿಯೂ ನೀನೆ | ವಿಧಾತಪಿತನೆ || ೨ ||

ನಿನ್ನನೆ ನಂಬಿದೆ | ನಿನ್ನನೆ ನಂಬಿಹೆ |
ನಿನ್ನನೆ ನಂಬುವೆ | ಕಾಲತ್ರಯದೆ || ೩ ||

---

## ೨೦

ರಾಗ: ಕೇದಾರ—ತಾಳ: ಝಂಪೆ

(ಏನೀಗ ನಾ ಗೈವೆ) ಎಂಬಂತೆ

ಪರಮಾತ್ಮ! ನೀನೆನ್ನ |
ಜನನಿಯುದರಿಂದ ಸಲೆ |

ಕರುಣೆಯಿಂ ಮಮತೆಯಿಂ |
ಎನ್ನ ಪಾಲಿಪುದೈ || ಪಲ್ಲ ||

ತಾಯಿಹಕ್ಕಿಯು ನೀನು |
ಕಿರುಮರಿಯು ನಾನೆನಲು |
ಕಾಯುತಂ ಸಂಪದದ |
ತಿಸಿಸನೂಡುವುದೈ || ೧ ||

ಹಸು ನೀನು ಪ್ರೇಮದಾ |
ಎಳಗರುವು ನಾನೆನಲು |
ಒಸೆದು ತಿಳಿವಿನಬೆಳಕ |
ಹಾಲ ಕುಡಿಸುವುದೈ || ೨ ||

ಪಡೆದ ಮಾತೆಯು ನೀನು |
ಕಿರುಕಂದ ನಾನೆನಲು ||
ಹಿಡಿದೆನ್ನ ಕೈಯ ಬಾಳ್— |
ಗಡಲ ದಾಂಟಿಪುದೈ || ೩ ||

(ತುಕಾರಾಮ ಸಾಧುವಿನ ಅದೊಂದು ಗೀತದ ಅನುವಾದ)



# ತುಂಡುಪದಗಳು

೨೧

ರಾಗ: ದರ್ಬಾರ್ ಕಾನಡಾ — ತಾಳ: ತ್ರಿವಟ್

(ಸುಯಶಾ ಜಯ ಮಹೇಶಾ) ಎಂಬಂತೆ

ಸದಯಾ | ಜಯ ಮ | ಹೋದಯಾ || ಪಲ್ಲ

ಸುಗುಣಾ—ಕರನಿಲಯಾ |

ಲೋಕಮಯಾ | ಸುಖಮಯಾ | ಶುಭಮಯ ಸುಕಾಯಾ ||ಅ.ಪ

ಉದಾರ-ಚರಿತಾ | ಸುಮನೋ-ಭರಿತಾ | ಸತ್ಯಯುತಾ |

ಶ್ರೀ- ಶೀಶ ನತ | ಮುನಿಜನಪೋಷ ಪ್ರ | ಕಾಶಾ || ೧

ಜಗದಾ—ಧಾರಾ | ಕುಸುಮಾ—ಕಾರಾ | ಮನೋಹರಾ |

ಶ್ರೀ-ಪಾಲ ಕರು | ಣಾಲವಾಲ ಗೋ | ಪಾಲಾ || ೨

## ೨೨

### ರಾಗ: ಕಾನಡಾ — ಆದಿತಾಳ

ಕಮಲೇಶನೆ | ಸುಮನೋಹರನೆ |
ನಮಿಸುವೆ ನಾಂ | ಕಮಲನಯನಾ || ಪಲ್ಲ ||

ಪ್ರಣವಾತ್ಮಕಾ | ದನುಜಾಂತಕಾ |
ಅನಘಚರಿತಾ | ವಿನಯಭರಿತಾ || ೧ ||

ಪರತರಗಾತ್ರಾ | ಪರಮಪವಿತ್ರಾ |
ಸರಸಿಜನೇತ್ರಾ | ವರಸುಚರಿತ್ರಾ || ೨ ||

ಮುಕ್ತಪುರೇಶಾ | ಮುಕ್ತ, ಪರೇಶಾ |
ಭಕ್ತಸುಪೋಷಾ | ಶ್ರೀ ವೆಂಕಟೇಶಾ || ೩ ||

---

## ೨೩

### ರಾಗ: ಬಸಂತ—ತಾಳ: ತ್ರಿವಟ

(ಮಹಾವಿಹಾರಾ ಶ್ರೀಹಾರಾ) ಎಂಬಂತೆ

ಸದಾವಿಲಾಸಾ | ದೇವೇಶಾ |
ಜಯ ಕೋಮಲ ಕರು | ಣಾಲವಾಲ ಜಯ || ಪಲ್ಲ ||

ಪರಮೇಶನೆ ತವ | ಚರಣಕೆ ನಮಿಪೆಂ |
ತರಳನ ದಯದೊಳ್ | ಪರಿಪಾಲಿಪುದೈ || ೧ ||

---

# ಭಜನೆ

ರಾಗ: ಬೃಂದಾವನ ಸಾರಂಗ—ತಾಳ: ಕೇರವಾ

## ಸ್ವರ ಪ್ರಸ್ತಾರ

(ಔಢವ—ಸ ರಿ ಮ ಪ ನಿ | ಸ ನಿ ಮ ಪ ರಿ)

ಮ ಪ ರಿ ಮ—ಸ ರಿ ಸ ನಿ ಸ | ಸ ರಿ ಸ ನಿ—ನಿ ಸ ರಿ ಸ ರಿ |

ರಿ ರಿ ಮ ಮ—ಪಾ ಪ | ಮ ಪ ನಿ ಪ ಮ ರಿ ಸಾ ‖ ಪಲ್ಲ

ರಿ ರಿ ಮ ಮ—ಪ ಪ ಪ ಮ ಪ | ಮ ಪ ನಿ ಪ—ಮ ರಿ ರಿ ಸ

ನಿ ಪ ಮ ಪ—ರಿ ಮ ರಿ ರಿ ಸ | ಸ ರಿ ಸ ನಿ—ನಿ ಸ ರಿ ಸ ರಿ ‖ ೧

(೨ನೆ ಚರಣವು ೧ನೆ ಚರಣವನ್ನು ಅನುಸರಿಸುತ್ತದೆ)

ಹರೇ ಪಾಂಡು-ರಂಗಾ | ವರದ ಶು-ಭಾಂಗಾ |
ಸುರಗಣ-ಸಂಗಾ । ಕರುಣಾ-ಪಾಂಗಾ ॥ ಪಲ್ಲ ॥

ನತಜನ-ಪಾಲಾ । ಧೃತವನ-ಮಾಲಾ ।
ನುತಗುಣ-ಶೀಲಾ । ಕೃತಗೋ-ಪಾಲಾ ॥ ೧ ॥

ಭಕ್ತಸು-ಪ್ರೀತಾ । ಮುಕ್ತ ವಿ-ಖ್ಯಾತಾ ।
ಲಕ್ಷ್ಮಣ-ವಿನುತಾ । ಲಕ್ಷ್ಮೀ-ನಾಥಾ ॥ ೨ ॥

---

೨೫

# ಭಜನೆ

ರಾಗ: ಯಮುನಾಕಲ್ಯಾಣ ಸಂಪೂರ್ಣ — ತಾಳ: ದುಮಾಳಿ

## ಸ್ವರ ಪ್ರಸ್ತಾರ

ಗ ಮ ಗ ರಿ ಸ | ನಿ ಸ ನಿ ದ ನಿ ವ ರಿ ಸ |
ನಿ ಸ ಗ ಗ ಗ ಗ | ನಿ ನಿ ನಿ ಮ ದ ನಿ ಸ ನಿ ದ ಪ ಮ ಪ ‖ ಪಲ್ಲ ‖

ಗ ಮ ಗ ರಿ ಸ | ಸ ನಿ ಸ ದ ನಿ ದ ರಿ ಸ |
ಸ ಸ ಗ ಗ ಗ | ಪ ನಿ ನಿ ದ ಸಾ ನಿ ದ ಪ ‖ ೧ ‖

(೨, ೩ನೆ ಚರಣಗಳು ೧ನೆ ಚರಣವನ್ನು ಅನುಸರಿಸುತ್ತವೆ)

**ಜಯಜಯ ಶ್ರೀ। ಪಾಂಡುರಂಗಾ।**
**ಜಯಜಯ ಶ್ರೀ। ಮಂಗಳಾಂಗಾ ॥ ಪಲ್ಲ ॥**

**ಶ್ರಿತಪಾಲಾ। ಪೂರ್ಣಲೀಲಾ।**
**ಸುತಶೀಲಾ। ಗಾನಲೋಲಾ ॥ ೧ ॥**

**ಹಿತದಾತಾ। ಭಕ್ತಪ್ರೀತಾ।**
**ಮತಿವಂತಾ। ದೀನನಾಥಾ ॥ ೨ ॥**

**ರಣಧೀರಾ। ವೇದಸಾರಾ।**
**ಗುಣಶೂರಾ। ಜಯಪರಾತ್ಪರಾ ॥ ೩ ॥**

# ಭಜನೆ

ರಾಗ: ಹಿಂದುಸ್ಥಾನಿಕಮಾಚ್ — ತಾಳ: ದುಮಾಳಿ

ಸ್ವರ ಪ್ರಸ್ತಾರ

(ಷಾಢವ ಸಂಪೂರ್ಣ—ಸರಿಗಮಪದಸ | ಸನಿದಪಮಗರಿಸ)

ಗಾ ಗ ಗ ಗಾ ಗ ಗ | ಗ ಮ ಪ ಪ ಗ ಮ ಗ ರಿ |
ಗಮಪಪ ಪದಪದಸಾ | ಪದಪಮ ಗಮಪದಪಮಗರಿಸ ‖ ಪಲ್ಲ ‖

ನೀ ನಿ ನಿ ನಿ ನಿ ದ ನಿ | ದ ಸಾ ಸಾ ಸ ಸ ನಿ ಸ ಸ |
ಗಮಪದಪದಸಸ | ಪದಪಮ ಪದಪಮ ಗಮಗರಿಸ ‖ ೧ ‖

(೨, ೩ನೆ ಚರಣಗಳು ೧ನೆ ಚರಣವನ್ನು ಅನುಸರಿಸುತ್ತವೆ. ೪ನೆ ೫ನೆ ಚರಣಗಳು ಪಲ್ಲವಿಯನ್ನೊಡಗೊಂಡ ೧ನೆ ಚರಣವನ್ನು ಅನುಸರಿಸುತ್ತವೆ.)

ಬಾಂಧವರೆಲ್ಲರು । ಮೋದದಿ ಕೂಡಿ ।
ಇಂದಿರೇಶನಾ । ಕೊಂಡಾಡಿ ॥ ಪಲ್ಲ ॥

ತಂದೆ ಶ್ರೀವಿಠಲನು । ತಾಯ್ ರಖುಮಾಬಾ । 
ಎಂದಾನಂದದಿ । ಕುಣಿಕುಣಿದಾಡಿ ॥ ೧ ॥

ತಂದೆ ಶ್ರೀರಾಮನು । ತಾಯ್ ಸೀತಾಬಾ ।
ಎಂದಾನಂದದಿ । ನಲಿನಲಿದಾಡಿ ॥ ೨ ॥

ತಂದೆ ಶ್ರೀಕೃಷ್ಣನು । ತಾಯ್ ರಾಧಾಬ್ಬ್ಯಾ ।
ಎಂದಾನಂದದಿ । ಕುಣಿಕುಣಿದಾಡಿ ॥ ೩ ॥

ವಿಟ್ಠಲ ವಿಟ್ಠಲ । ವಿಟ್ಠಲ ವಿಟ್ಠಲ ।
ವಿಟ್ಠಲ ವಿಟ್ಠಲ । ಪಾಂಡುರಂಗಾ ॥
ವಿಟ್ಠಲ ವಿಟ್ಠಲ । ಪಾಂಡುರಂಗಾ ಜೈ ।
ವಿಟ್ಠಲ ವಿಟ್ಠಲ । ಶ್ರೀರಂಗಾ ಜೈ ॥ ೪ ॥

ಾಲ್॥ ವಿಟ್ಠಲ್ ವಿಟ್ಠಲ್ ವಿಟ್ಠಲ್ ವಿಟ್ಠಲ್ ।
ವಿಟ್ಠಲ್ ವಿಟ್ಠಲ್ ವಿಟ್ಠಲ್ ವಿಟ್ಠಲ್ ।
ವಿಟ್ಠಲ್ ವಿಟ್ಠಲ್ ವಿಟ್ಠಲ್ ಪಾಂಡುರಂಗಾ ॥
ವಿಟ್ಠಲ್ ವಿಟ್ಠಲ್ ವಿಟ್ಠಲ್ ವಿಟ್ಠಲ್ ।
ಪಾಂಡುರಂಗಾ ಜೈ ।
ವಿಟ್ಠಲ್ ವಿಟ್ಠಲ್ ವಿಟ್ಠಲ್ ವಿಟ್ಠಲ್ ।
ಶ್ರೀರಂಗಾ ಜೈ ॥ ೫ ॥

---

೨೭

## ಭಜನೆ

ರಾಗ. ನವರೋಜು—ಏಕತಾಳ

(ಗೋವಿಂದ ಬಾರಯ್ಯ । ಬಾ ಬಾ ಮುರಾರಿ) ಎಂಬಂತೆ

ಗೋವಿಂದ ಗೋಪಾಲ । ಕೃಷ್ಣ ಮುಕುಂದಾ ।
ರಾಧೇಶ ಸದ್ಗುಣ ವೃಂದನೆ ಬಾ ॥

ಮಾಧವ ಬಾ ನತ । ಬಾಂಧವ ಬಾ ।
ಸಾಧುಸುಪಾಲಾ ವನಮಾಲಾ । ಶ್ರೀಲೋಲಾ ‖ ೧ ‖

ಶ್ರೀಧರ ಬಾ ಸುಮ । ನೋಹರ ಬಾ ।
ಯಾದವವಿನುತಾ ಗುಣಶೂರಾ । ಸುವಿಹಾರಾ ‖ ೨ ‖

---

೨೮

## ಭಜನೆ

ರಾಗ: ಮೋಹನ—ತಾಳ: ಉಗಡಾ
(ಮಾಯು ಬಾಪ ಪಾಂಡುರಂಗ) ಎಂಬಂತೆ

ಕರದಿ ತಾಳ । ಹಿಡಿದು ಕುಣಿದು ।
ಹರಿಯ ಚರಣ । ಮನದಿ ನೆನೆದು ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ ‖ ಪಲ್ಲ ‖

ಆದಿರಹಿತ । ಆದಿಮೂಲ ।
ವೇದವೇದ್ಯ । ಭುವನಪಾಲ ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ ‖ ೧ ‖

ವಿಶ್ವಕರ್ತ । ವಿಶ್ವಭರಿತ ।
ವಿಶ್ವನಾಥ । ವಿಶ್ವನಮಿತ ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ ‖ ೨ ‖

ದುರಿತನಾಶ । ಸುಗುಣಭೂಷ ।
ಶರಣ ಸುಜನ । ಪೋಷ, ಶ್ರೀಶ, ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ || ೩ ||

ರಾಮಕೃಷ್ಣ । ಕೃಷ್ಣರಾಮ ।
ಕೃಷ್ಣರಾಮ । ರಾಮಕೃಷ್ಣ ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ || ೪ ||

ರಾಮರಾಮ । ರಾಮರಾಮ ।
ಕೃಷ್ಣಕೃಷ್ಣ । ಕೃಷ್ಣಕೃಷ್ಣ ।
ರಾಮ ಎನ್ನಿರೊ । ಒಲಿದು । ಕೃಷ್ಣ ಎನ್ನಿರೊ || ೫ ||

---

## ೨೯

## ಭಜನೆ

ರಾಗ: ಕಮಾಚ್ — ತಾಳ: ಉಗಡಾ
(ಒರಿಧವ ವಾಸುದೇವಾ) ಎಂಬಂತೆ

ಜಯ ಜಯ ಗೋಪಬಾಲಾ ।
ಮುರಲೀಧರಾ ॥ ಪಲ್ಲ ॥

ಮುರಲೀಧರಾ । ದೇವಾ ।
ಮುರಸಂಹರಾ । ದೇವಾ । ಕರುಣಾಕರಾ ||ಅ ಪ||

ಮಂಗಳರೂಪಾ । ಮಂಗಳನಾಮಾ ।
ಮಂಗಳಾಕರಾ । ಪ್ರೇಮ-ಧಾಮಾ ॥ ೧ ॥

ಮುರಲೀಧರಾ । ದೇವಾ ।
ಮುರಸಂಹರಾ । ದೇವಾ । ಕರುಣಾಕರಾ

---

## ೩೦

## ಭಜನೆ

ರಾಗ: ಮಾಂಡ್ — ಏಕತಾಳ
(ಯೋರಿ ಯೋರಿ ಮಾಝಾ ರಾಮಾ) ಎಂಬಂತೆ

ಬನ್ನಿರೆಲ್ಲಾ ಗೆಳೆಯರೀಗ ।
ಚೆನ್ನ ಕೇಶವನಾ ಕಾಣಲಿಕೆ ॥ ಪಲ್ಲ ॥

ಚೆನ್ನಕೇಶವನಾ ಕಾಣಲಿಕೆ ।
ಧನ್ಯಮಾಧವನಾ ನೋಡಲಿಕೆ ॥ ಅ. ಪ. ॥

ಕೊರಳಿನಲ್ಲಿ ತುಲಸಿಮಾಲೆ, ।
ಕರಿಯ ನಾಮ ಹಣೆಯಮೇಲೆ, ।
ಕರದಿ ತಾಳ ಧರಿಸಿಮೇಲೆ ।
ಸಿರಿಯವರನಾ ನೆನೆಯುತಾ ॥ ೧ ॥

ಕೂಡಿ ಬನ್ನಿರಯ್ಯ ಒಲಿದು, ।
ಹಾಡಿ ಭಜನೆ ತಾಳ ಹೊಡೆದು, ॥
ಮಾಡಿ ನಾದ, ನಲಿದು, ಕುಣಿದು, ।
“ವಾಸುದೇವಾ” ಎನ್ನುತಾ ॥ ೨ ॥

“ದಿವಿಜಪಾಲಾ, ದನುಜಕಾಲಾ, ।
ಸುವನಮಾಲಾ, ಗಾನಲೋಲಾ, ॥
ಕರುಣಶೀಲಾ, ಪ್ರೇಮವಾಲಾ, ।
ವರದ ವಿಠಲಾ” ಎನ್ನುತಾ ॥ ೩ ॥

“ರಾಧಿಕೇಶಾ, ಕಂಸನಾಶಾ ।
ಸಾಧುಪೋಷಾ, ಚಿತ್–ಪ್ರಕಾಶಾ, ॥
ವೇದಘೋಷಾ, ಮಂಜುಭಾಷಾ, ।
ವೆಂಕಟೇಶಾ” ಎನ್ನುತಾ ॥ ೪ ॥

“ರಾಮಕೃಷ್ಣಾ, ಕೃಷ್ಣರಾಮಾ, ।
ಕೃಷ್ಣರಾಮಾ, ರಾಮಕೃಷ್ಣಾ, ॥
ರಾಮರಾಮಾ, ಕೃಷ್ಣಕೃಷ್ಣಾ, ।
ರಾಮಕೃಷ್ಣಾ” ಎನ್ನುತಾ ॥ ೫ ॥

# ಭಜನೆ

ರಾಗ: ಆನಂದಭೈರವಿ — ತಾಳ: ರೂಪಕ

(ಛಲವಾ ರಾಮುನೊಳು) ಅಥವಾ (ಇವನೇ ಗಿರಿಜಾ) ಎಂಬಂತೆ

ಕರುಣಾ-ಕರ ದೇವ ರಾಮಾ ।
ಶರಣಾ-ದರ ಪ್ರೇಮಧಾಮಾ ॥ ಪಲ್ಲ ॥

ರಾಮಾ-ಖಳಕುಲವಿರಾಮಾ ।
ರಾಮಾ-ಸೂರ್ಯಕುಲಸೋಮಾ ॥
ರಾಮಾ-ಧರಣಿಜಾಕಾಮಾ ।
ರಾಮಾ-ತಾರಕಸುನಾಮಾ ॥ ೧ ॥



೩೨

# ಶ್ರೀಹರಿಮಾತೃಕಾಮಾಲಾ ಸ್ತೋತ್ರ

ಶ್ರೀ …ಶ್ರೀಕರ ದುರಿತವಿನಾಶ ನಮೋ ।
ಅ …ಅಗಣಿತ ಸದ್ಗುಣಭೂಷ ನಮೋ ॥
ಆ …ಆನತ ನತಗಣಪೋಷ ನಮೋ ।
ಇ …ಇಭವರದಾ ಲಕ್ಷ್ಮೀಶ ನಮೋ ॥ ೧ ॥

ಈ …ಈಶ ದನುಜಕುಲಕಾಲ ನಮೋ ।
ಉ …ಉತ್ತಮಪುರುಷ ಸುಶೀಲ ನಮೋ ॥
ಊ …ಊರ್ಜಿತ ಸದ್ಗುಣಮಾಲ ನಮೋ ।
ಋ …ಋತಚಿದ್ರೂಪ ಸುಚೇಲ ನಮೋ ॥ ೨ ॥

ಏ ....ಏನಃಸಂಘನಿಘಾತ ನಮೋ ।
ಐ ....ಐಶ್ವರ್ಯಾಖಿಲನಾಥ ನಮೋ ॥
ಓ ....ಓಂಕಾರಾತ್ಮ ಮಹಾತ್ಮ ನಮೋ ।
ಔ ....ಔಪನಿಷಧ ಪರಮಾತ್ಮ ನಮೋ ॥ ೩

ಅಂ ....ಅಂತರರಹಿತ ಶುಭಗಾತ್ರ ನಮೋ ।
ಅಃ ....ಅನಿಮಿಷಸಂಸ್ತುತಿಪಾತ್ರ ನಮೋ ॥
ಕ ....ಕಮಲನೇತ್ರ ಹರಮಿತ್ರ ನಮೋ ।
ಖ ....ಖಲತತಿಹರ ಸುಚರಿತ್ರ ನಮೋ ॥ ೪

ಗ ....ಗರುಡಗಮನ ವನಹಾರ ನಮೋ ।
ಘ ....ಘನಪಾವನ ಶ್ರುತಿಸಾರ ನಮೋ ॥
ಙ ....ಙಕಾರಸತ್ಪ್ರಿಯ ಧೀರ ನಮೋ ।
ಚ ....ಚರಣಾನತ ಸುರಪೂರ ನಮೋ ॥ ೫

ಛ ....ಛವಿನಿರ್ಜಿತಘನಭೂಮ ನಮೋ ।
ಜ ....ಜಲಜನಾಭ ಗುಣಧಾಮ ನಮೋ ॥

ಝು ....ಝುಂಷಾವತಾರಪ್ರೇಮ ನಮೋ ।
ಞಾ ....ಜ್ಞಾನಶರಧಿ ಶ್ರೀರಾಮ ನಮೋ ॥ ೬ ॥

ಟ ....ಟಂಕಾಮುರರಿಪುಶೂಲ ನಮೋ ।
ಠ ....ಠಕಾರ ಶೋಭಿತ ವಿಠಲ ನಮೋ ॥
ಡ ....ಡಂಭರಹಿತ ಗೋಪಾಲ ನಮೋ ।
ಢ ....ಢಂ ಢಂ ಕೀರ್ತನಲೋಲ ನಮೋ ॥ ೭ ॥

ಣ ....ಣಕಾರಾಂತೇಷದೂರ ನಮೋ ।
ತ ....ತನುಸಾದೂರ ಸುಸಾರ ನಮೋ ॥
ಥ ....ಥಳಿತ ಸುಕೌಸ್ತುಭಧಾರ ನಮೋ ।
ದ ....ದನುಜಾಂತಕ ಭೂದಾರ ನಮೋ ॥ ೮ ॥

ಧ ....ಧರಣೀಧರ ಅಘಹರಣ ನಮೋ ।
ನ ....ನತಜನವಂದಿತಚರಣ ನಮೋ ॥
ಪ ....ಪರತರ ಕರುಣಾಭರಣ ನಮೋ ।
ಫ ....ಫಣಿಶಾಯಿಶ್ರೀ ಶ್ರೀರಮಣ ನಮೋ ॥ ೯ ॥

ಬ ...ಬಲರಾಮಾನುಜ ದೇವ ನಮೋ ।

ಭ ...ಭಕ್ತಬಂಧು ಸಂಜೀವ ನಮೋ ॥

ಮ ...ಮದನಜನಕ ಮುರ ವೈರಿ ನಮೋ ।

ಯ ...ಯದುಕುಲವರ್ಧನ ಶೌರಿ ನಮೋ ॥೧೦

ರ ...ರಜನೀಚರಕುಲಕಾಲ ನಮೋ ।

ಲ ...ಲಕ್ಷ್ಮಣನುತ ಸುರಪಾಲ ನಮೋ ॥

ವ ...ವರದ ಯಶೋದಾಬಾಲ ನಮೋ ।

ಶ ...ಶರಧಿಶಯನ ಶ್ರೀಲೋಲ ನಮೋ ॥೧೧

ಷ ...ಷಡಭಿಜ್ಞಾಕೃತಿಕಾಶ ನಮೋ ।

ಸ ...ಸಚರಾಚರ ಜಗದೀಶ ನಮೋ ॥

ಹ ...ಹರಿ ನರಹರಿ ಸರ್ವೇಶ ನಮೋ ।

ಕ್ಷ ...ಕ್ಷಯರಹಿತಾಕ್ಷಯಕೋಶ ನಮೋ ॥೧

## ಭಜನೆ

ರಾಗ: ಹಿಂದುಸ್ಥಾನಿಸುರುಟಿ — ತಾಳ: ಉಗಡಾ

ವಾಸುಕೀಶಯ—ನಾ, ಶ್ರೀರಮಣಾ ।
ವಾಸುದೇವ ಹರೇ—ಮುರಾರೇ, ॥
ಕ್ಲೇಶನಾಶ, ಸು-ಪೂತ ಚರಣಾ,
ಶ್ರೀಶ, ಗಿರಿಧಾರೇ,—ನರಹರೇ ॥ ೧ ॥

ಶಂಕಚಕ್ರಧ-ರಾ, ಸುಖಕರಾ, ।
ಪಂಕಜಾಕ್ಷ, ಧರಾ,—ವಿಹಾರಾ ॥
ವೆಂಕಟೇಶ, ವೇ—ದಾಂತಸಾರಾ, ।
ಸಂಕಟವಿದಾರಾ, — ಉದಾರಾ ॥ ೨ ॥

ನಾರದಾದಿ ಮು-ನೀಂದ್ರ ನಮಿತಾ, ।
ಸಾರಗುಣಭರಿತಾ,— ಅನಂತಾ ॥
ಮಾರತಾತ, ಗಂ—ಭೀರಚರಿತಾ, ।
ಧೀರ, ಗುಣವಂತಾ,— ವಿನೀತಾ ॥ ೩ ॥

ಇಂದಿರಾನಂ—ದಾ, ಗೋವಿಂದಾ, ।
ಮಂದರಾದ್ರಿಧರಾ,— ಮುಕುಂದಾ, ॥
ಸಿಂಧುಶಾಯಿ, ಪ್ರ—ಹ್ಲಾದವರದಾ, ।
ನಂದಕಂದ, ಕಲಾ—ವಿನೋದಾ ॥ ೪ ॥

ರಾಮ ಜೈ ರಾ-ಮಾ, ಶ್ರೀರಾಮಾ, ।
ರಾಮ ಜೈ ರಾಮಾ,—ಸುನಾಮಾ, ॥
ರಾಮ ಜೈ ರಾ-ಮಾ, ಶ್ರೀರಾಮಾ, ।
ರಾಮ ಜೈ ರಾಮಾ,—ಸುಪ್ರೇಮಾ ॥ ೫ ॥

ಕೃಷ್ಣ ಜೈ ಕೃ-ಷ್ಣಾ, ಶ್ರೀಕೃಷ್ಣಾ, ।
ಕೃಷ್ಣ ಜೈ ಕೃಷ್ಣಾ,— ವಿತೃಷ್ಣಾ, ॥
ಕೃಷ್ಣ ಜೈ ಕೃ-ಷ್ಣಾ, ಶ್ರೀಕೃಷ್ಣಾ, ।
ಕೃಷ್ಣ ಜೈ ಕೃಷ್ಣಾ,—ಸತ್ಕರುಣಾ ॥ ೬ ॥

ವಿಠಲ ಜೈ ವಿಠ-ಲಾ, ಶ್ರೀವಿಠಲಾ, ।
ವಿಠಲ ಜೈ ವಿಠಲಾ,— ವಿಶಾಲಾ, ॥
ವಿಠಲ ಜೈ ವಿಠ-ಲಾ, ಶ್ರೀವಿಠಲಾ, ।
ವಿಠಲ ಜೈ ವಿಠಲಾ,—ಸುನೀಲಾ ॥ ೭ ॥

---

೩೪

ರಾಗ: ನೋಟ್—ಏಕತಾಳ

(ಸದಾ ಮಣಿವೇ ನೆನೆವೇ) ಎಂಬಂತೆ

ಧರಾ—ಧರಣಾ—ಸುಗುಣಾ—ಭರಣಾ—
ಶರಣಾ—ದರಣಾ—ಪೊರೆಯೋ—ನಾರಾಯಣಾ ॥ ಪಲ್ಲ ॥

ಸುಖಸದನಾ—ದೇವಾದಿದೇವ, ಸದಾರಂಜನಾ, |
ಪಾವನ, ನಿರ್ಗುಣ, ಕರುಣಾಘನಾ, ||
ಶ್ರೀವನಿತಾರಮಣಾ || ೧ ||

---

## ೩೫

ರಾಗ: ಪೂರ್ವಿ — ತಾಳ: ತ್ರಿವಟ

ಜಯಜಯ ಸುಗುಣಪ್ರಭಾವ, ಮಾಧವಾ, |
ಜಯಜಯ ಭಯಹರ, ಲೋಕಬಾಂಧವಾ, |
ಜಯ ದೇವರದೇವಾ || ಪಲ್ಲ ||

ಪ್ರಭುವರ, ಗಿರಿಧರ, ಜನಸುತಚರಿತಾ, |
ಶುಭಕರ, ಸುಖಕರ, ಲಕ್ಷ್ಮಣವಿನುತಾ, ||
ಅಭಯದ, ನಭಸನ್ನಿಭ, ಭಾಗ್ಯಯುತಾ, |
ವಿಭವದಿ ಶಾಂತಿಯ ನೀಡೈ || ೧ ||

---

## ೩೬

# ಮಂಗಳಪದ

(ಸ್ವಾಮಿದೇವನೆ) ಅಥವಾ (ಧೀರ ವೀರನ) ಎಂಬಂತೆ

ಂಗಳಂ ಜಯ ಮಂಗಳಂ ಶುಭ | ಮಂಗಳಂ ಶ್ರೀರಂಗಗೆ || ಪಲ್ಲ ||
ಂಗಳಾತ್ಮ, ಅನಂಗಜನಕ, ಶು | ಭಾಂಗ, ಕರುಣಾಪಾಂಗಗೆ ||ಅ. ಪ.||

ಮಂದಬುದ್ಧಿಯ ತಮನ ಕೆಡಹುತ, | ವೇದ ಸಲಹಿದ **ಮತ್ಸ್ಯಗೆ** ||
ಮಂದರಾದ್ರಿಯನೆತ್ತಿ, ದಿವಿಜರ | ಅಂದವೆಣಿಸಿದ **ಕೂರ್ಮಗೆ** || ೧

ಸೀಳಿ ದನುಜನ, ಭೂರಮಣಿಯನು | ಕಾಯ್ದು ಮೆರೆದ **ವರಾಹಗೆ** ||
ಖೂಳ ದೈತ್ಯನ ಕೊಂದು, ಬಾಲನ | ತಲೆಯನುಳಿಸಿದ **ನೃಹರಿಗೆ** || ೨

ಬಲಿಯ ಮೂರಡಿ ಬೇಡಿ, ತ್ರಿದಶರ | ಪಾಲಿಸಿದ **ವಾಮನನಿಗೆ** ||
ಅಳಿಸಿ ಕ್ಷತ್ರಿಯರನ್ನು, ದ್ವಿಜಕುಲ | ವನು ಪೊರೆವ **ಭಾರ್ಗವನಿಗೆ**|| ೩

ದುರುಳ ದಶಕಂಠಾದಿಗಳ ತರಿ | ದಿಳೆಯ ತಣಿಸಿದ **ರಾಮಗೆ** ||
ಕುರುಕುಲವ ಸವರುತ್ತ ಪಾಂಡವ | ಬಲವ ಮೆರೆಸಿದ **ಕೃಷ್ಣಗೆ** || ೪

ಕುಜನತೆಯ ಧಿಕ್ಕರಿಸಿ, ಧರ್ಮದ | ಪಥವ ತೋರಿದ **ಬುದ್ಧಗೆ** ||
ಕುಜನನಾಶನದಿಂದ ಧರೆಯ- | ನ್ನೊಲಿದು ಪಾಲಿಪ **ಕಲ್ಕಿಗೆ** || ೫

**|| ಶ್ರೀ ಕೃಷ್ಣಾರ್ಪಣಮಸ್ತು ||**

ಸಂಪೂರ್ಣಂ.

ಶ್ರೀಯುತ ಜಿ. ಎನ್. ಲಕ್ಷ್ಮಣ ಪೈಗಳಿಂದ ರಚಿತವಾದ

# ಕನ್ನಡ ಪದ್ಯರತ್ನಾವಳಿ (ಪ್ರಥಮ ಭಾಗ)

[ಮೂರನೆ ಆವೃತ್ತಿ]

ಕ್ರಯ: ೦-೩-೬

ಈ ಪುಸ್ತಕವನ್ನು ಮದರಾಸು ಟೆಕ್ಸ್ಟಬುಕ್ ಕಮಿಟಿಯುವರು ಶಾಲೆ
ಉಪಯೋಗಕ್ಕಾಗಿಯೂ, ಮುಂಬಯಿ ಟೆಕ್ಸ್ಟಬುಕ್ ಕಮಿಟಿಯುವರು
ಂಡರಿ ಶಾಲೆಗಳ ಪಠ್ಯಪುಸ್ತಕ, ಪ್ರೈಮೆರಿ ಶಾಲೆಗಳ ಇನಾಮು ಪುಸ್ತಕ
ಲೈಬ್ರೇರಿಗಳ ಉಪಯೋಗಕ್ಕಾಗಿಯೂ, ಮೈಸೂರು ಟೆಕ್ಸ್ಟಬುಕ್
ುಟಿಯುವರು ಎಲ್ಲ ಲೈಬ್ರೇರಿಗಳ ಉಪಯೋಗಕ್ಕಾಗಿಯೂ, ಮಂಜೂರು
ಾಡಿದ್ದಾರೆ.

## ಕೆಲವು ಅಭಿಪ್ರಾಯಗಳು

Praktana Vimarsa Vichakshana **Rao Bahadur Narasimhacharya.** M. A., M. R. A. S., Bangalore: "....... e verses run smoothly and are simple in style. The ok deserves to be made a text in Primary Schools. ..."

**The Modern Review,** Calcutta: "..... The attempt quite laudable ..... The book is no doubt well-fitted the use of primary schools"

**The Hindu,** Madras: "This book contains a collectio[n] of poems suitable for the use of primary schools. Th[e] author has versified a few of the well-known stories i[n] Kanarese. The moral behind these stories will b[e] instructive to the young readers of this book."

**ವಿಶ್ವಕರ್ಣಾಟಕ,** ಬೆಂಗಳೂರು: "ಶ್ರೀ. ಜಿ. ಎನ್. ಲಕ್ಷ್ಮಣ ಪೈಗಳ[ು] ಕನ್ನಡಿಗರಿಗೆ ಹೊಸಬರಲ್ಲ. . . . . . . . . . ಇದರಲ್ಲಿ ೨೦ ಸಣ್ಣ ಸಣ್ಣ ಕವಿತೆಗಳಿವೆ[.] ಶೈಲಿಯು ಸರಳವಾಗಿದೆ. ಶಾಲಾಬಾಲಕರಿಗೆ ನಿಜವಾಗಿಯೂ ಇದು ಬಹಳ ಉಪ[-] ಯುಕ್ತವಾದುದೆಂಬುದರಲ್ಲಿ ಸಂಶಯವಿಲ್ಲ."

**ಕಂಠೀರವ,** ಮಂಗಳೂರು: ". . . . . . ಹಾಡುಗಳೆಲ್ಲ ಲಲಿತವಾಗಿವೆ[.] ಮಕ್ಕಳು ಪ್ರೀತಿಸುವ ವಿಷಯಗಳನ್ನೆ ಎತ್ತಿ, ಕ್ಲಿಷ್ಟಪದಗಳನ್ನು ಉಪಯೋಗಿಸದೆ, ಬಲು[] ಸರಳವಾಗಿ, ಪ್ರಾಸಾನುಬದ್ಧವಾಗಿ ಪದ್ಯಗಳು ರಚಿಸಲಾಗಿವೆ. ಮಕ್ಕಳಿಗೆ ಕವಿತೆಯ[] ಮಾಧುರ್ಯವನ್ನಿವು ಕೊಡಲೂ ಸಹಾಯಕವಾಗಿವೆ."

**ಸ್ವಧರ್ಮ,** ಧಾರವಾಡ: ". . . . . . . . . . . . ಪದ್ಯಗಳು ಬೇರೆಬೇ[ರೆ] ಛಂದಸ್ಸಿನಲ್ಲಿ ಆದಿಪ್ರಾಸದ ಜೊತೆಗೆ ಅಲ್ಲಲ್ಲಿ ಅಂತ್ಯಪ್ರಾಸವನ್ನು ಸಾಧಿಸಿರುವುದೂ[,] ಭಾಷೆಯು ಸರಳವಾಗಿಯೂ ಶುದ್ಧವಾಗಿರುವುದೂ ಈ ಪುಸ್ತಕಕ್ಕೆ ಭೂಷಣವಾಗಿರು[-] ವುದು. . . . . . . ."

ಪ್ರಕಾಶಕರು:

ಹರಿಹರ ಛಾಪಖಾನೆ,

ಪುತ್ತೂರು, (ದ. ಕನ್ನಡ.)

## ಶ್ರೀ. ಜಿ ಎನ್. ಲಕ್ಷ್ಮಣ ಪೈಗಳಿಂದ ರಚಿತವಾದ

# ಸಚಿತ್ರ ಅಭಿನಯಗೀತಾವಳಿ

[ದ್ವಿತೀಯ ಮುದ್ರಣ]

**ಕ್ರಯ: ೩ ಆಣೆ**

೧, ೨, ೩ನೆ ದರ್ಜೆಗಳ ಪದ್ಯಪಾಠಕ್ಕೂ ಅಭಿನಯ ಪಾಠಕ್ಕೂ ಯೋಗ್ಯವಾದ ಈ ಪುಸ್ತಕವು ಮದರಾಸು, ಮುಂಬಯಿ, ಮೈಸೂರು ಟೆಕ್ಸ್ಟ್‌ಬುಕ್ ಕಮಿಟಿಯವರಿಂದ ಮಂಜೂರಾಗಿರುವುದು.

## ಕೆಲವು ಅಭಿಪ್ರಾಯಗಳು.

**ಶ್ರೀಮಾನ್ ಬಿ. ಎಂ ಶ್ರೀಕಂಠಯ್ಯನವರು,** ಎಮ್. ಎ., ಬಿ. ಎಲ್., ಸೆಂಟ್ರಲ್‌ಕಾಲೇಜ್, ಬೆಂಗಳೂರು: "....... ತಾವು ವಿಶ್ವಾಸವಿಟ್ಟು ಕಳುಹಿಸಿದ ಸಚಿತ್ರ ಅಭಿನಯಗೀತಾವಳಿಯ ಪ್ರತಿ ತಲುಪಿ, ಓದಿ ನೋಡಿ ಸಂತೋಷವಾಯಿತು. ಮನೆಯಲ್ಲಿ ಮಕ್ಕಳು ಆಗಲೇ ಕೆಲವು ಹಾಡುಗಳನ್ನು ಕಲಿತು ಕುಣಿಯುತಿದ್ದಾರೆ. ತಮ್ಮ ಕವಿತೆಗಳು ಚಿಕ್ಕ ಮಕ್ಕಳಿಗೆ ಮನೋರಂಜಕವಾಗಿಯೂ ಸುಲಭವಾದ ಶೈಲಿಯಲ್ಲಿ ಬರೆದುದಾಗಿಯೂ ಇರುವುದರಿಂದ ಮಕ್ಕಳ ಸಾಹಿತ್ಯದಲ್ಲಿ ಪ್ರಿಯಸ್ಥಾನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ತಮ್ಮ ಕೀರ್ತನಾಂಜಲಿಯು ಭಕ್ತಿಕವನಗಳೂ ಅಭಿನಯಗೀತಾವಳಿಗಳೂ ಕನ್ನಡಿಗರ ಆದರಕ್ಕೆ ಪಾತ್ರವಾಗಲೆಂದು ಹಾರೈಸುತ್ತೇನೆ. . . . ."

**Sriman M. Govinda Pai,** *Manjeshwar*:"..... All songs are good and quite suitable to the needs of the children for whom they are intended. I am sure these songs will be taught in all our schools and the children will enjoy them. My congratulations to you......"

Praktana Vimarsa Vichakshana Maha Mahopadhyaya **Rao Bahadur R. Narasimhacharya,** Esq., M. A., M. R. A. S., Bangalore: "Thank you for sending me a copy of your ಸಚಿತ್ರ ಅಭಿನಯಗೀತಾವಳಿ. I went through the book with great interest and pleasure. The songs are written in simple style and will certainly be liked by young pupils. The book deserves to be used in Elementary Schools. The work of the author in this line deserves high commendation. The illustrations enhance the value of the book."

ಮುದ್ರಕರು ವ ಪ್ರಕಾಶಕರು:

ಹರಿಹರ ಛಾಪಖಾನೆ ಮತ್ತು ಪುಸ್ತಕಾಲಯ,

ಬ್ರಾಂಚ್ ಆಫಿ[illegible] ಮಡಿಕೇರಿ.